

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 422 |
| **ಸದಸ್ಯರ ಹೆಸರು** | ಶ್ರೀ ಕೆ. ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶಿತರು) |
| **ಉತ್ತರಿಸಬೇಕಾದ ದಿನಾಂಕ** | 15.09.2021 |
| **ಉತ್ತರಿಸುವ ಸಚಿವರು** | ಕಂದಾಯ ಸಚಿವರು |

| **ಕ್ರ. ಸಂ.** | **ಪ್ರಶ್ನೆ ವಿವರ** | **ಉತ್ತರ** |
|---|---|---|
| ಅ) | ರಾಜ್ಯ ಸರ್ಕಾರ ಡ್ರೋನ್-ಯುಎವಿ ಆಧಾರಿತ ಭೂಮಾಪನ ಕಾರ್ಯವನ್ನು ಸರ್ವೆ ಆಫ್ ಇಂಡಿಯಾದವರ ಸಹಯೋಗದೊಂದಿಗೆ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಕೈಗೊಳ್ಳಲು ಒಡಂಬಡಿಕೆ ಪತ್ರ (Memorandum of Understanding) ಮಾಡಿಕೊಂಡಿರುವುದು ನಿಜವೇ; | ಹೌದು |
| ಆ) | ಹಾಗಿದ್ದಲ್ಲಿ, ಈ ಯೋಜನೆಗೆ ಒಳಪಡುವ ಜಿಲ್ಲೆಗಳು ಯಾವುವು ಮತ್ತು ಒಡಂಬಡಿಕೆ ಪತ್ರದಲ್ಲಿರುವ ಮತ್ತು ಪಾಲಿಸಬೇಕಾದ ಒಪ್ಪಂದ ಮತ್ತು ಷರತ್ತುಗಳು ಯಾವುವು; (ಸಂಪೂರ್ಣ ಮಾಹಿತಿಯನ್ನು ಒಡಂಬಡಿಕೆ ಪತ್ರದೊಂದಿಗೆ ನೀಡುವುದು) | ರಾಜ್ಯದ 5 ಜಿಲ್ಲೆಗಳಾದ ರಾಮನಗರ, ತುಮಕೂರು, ಹಾಸನ, ಬೆಳಗಾವಿ ಮತ್ತು ಉತ್ತರಕನ್ನಡ ಜಿಲ್ಲೆಗಳು ಮತ್ತು ಬೆಂಗಳೂರು ನಗರದಲ್ಲಿ ಡ್ರೋನ್ ಆಧಾರಿತ ಭೂಮಾಪನ ಕಾರ್ಯವನ್ನು ಭಾರತೀಯ ಸರ್ವೇಕ್ಷಣಾ ಸಂಸ್ಥೆಯ ಸಹಯೋಗದಲ್ಲಿ ಕೈಗೊಳ್ಳಲಾಗುತ್ತಿದೆ. ಈ ಕುರಿತು ಕರ್ನಾಟಕ ಸರ್ಕಾರ ಮತ್ತು ಭಾರತೀಯ ಸರ್ವೇಕ್ಷಣಾ ಸಂಸ್ಥೆಯೊಂದಿಗೆ ಮಾಡಿಕೊಳ್ಳಲಾದ ಒಡಂಬಡಿಕಾ ಪತ್ರದ ಪ್ರತಿಯನ್ನು ಅನುಬಂಧದಲ್ಲಿರಿಸಿದೆ. |
| ಇ) | ಈ ಯೋಜನೆಯ ಅನುಷ್ಠಾನ ಯಾವ ಹಂತದಲ್ಲಿದೆ; ಈ ಯೋಜನೆಯ ಅಂದಾಜು ಮೊತ್ತವೆಷ್ಟು; ಈ ವೆಚ್ಚವನ್ನು ಯಾವ ಸಂಪನ್ಮೂಲದಿಂದ ಭರಿಸಲಾಗುತ್ತದೆ. ಇದುವರೆಗೂ ಭರಿಸಲಾಗಿರುವ ವೆಚ್ಚ ಎಷ್ಟು? (ವಿವರವನ್ನು ನೀಡುವುದು) | ರಾಜ್ಯದಲ್ಲಿ ಡ್ರೋನ್-ಯುಎವಿ ಆಧಾರಿತ ಮರು ಭೂಮಾಪನ ಕಾರ್ಯದ ಭಾಗವಾಗಿ ಈಗಾಗಲೆ ಭಾರತೀಯ ಸರ್ವೇಕ್ಷಣಾ ಸಂಸ್ಥೆ ವತಿಯಿಂದ ರಾಜ್ಯದ್ಯಂತ 49 ಕೇಂದ್ರಗಳಲ್ಲಿ Continuosly Operating Referencing Station (CORS) ಗಳನ್ನು ಸ್ಥಾಪಿಸಲಾಗಿರುತ್ತದೆ ಹಾಗೂ ತುಮಕೂರು, ರಾಮನಗರ ಮತ್ತು ಬೆಂಗಳೂರು ನಗರದಲ್ಲಿ ಡ್ರೋನ್ Flying ಕಾರ್ಯವನ್ನು ಪ್ರಾರಂಭಿಸಲಾಗಿರುತ್ತದೆ.<br><br>ಈ ಯೋಜನೆಯ ಅನುಷ್ಠಾನಕ್ಕೆ ಅಂದಾಜು 76.00 ಕೋಟಿ ವೆಚ್ಚವಾಗಲಿದ್ದು, ಇದನ್ನು DILRMP ಯೋಜನೆಯಡಿ ಕೇಂದ್ರ ಸರ್ಕಾರದಿಂದ ಮಂಜೂರಾದ ಅನುದಾನದಿಂದ ಹಾಗೂ ಭೂಮಾಪನ ಇಲಾಖೆಯ ಮೋಜಣಿ ಬಳಕೆದಾರರ ನಿಧಿಯಿಂದ ಭರಿಸಲಾಗುತ್ತಿದೆ. ಇದುವರೆಗೆ ಭಾರತೀಯ ಸರ್ವೇಕ್ಷಣಾ ಸಂಸ್ಥೆಗೆ ರೂ 22.00 ಕೋಟಿ ಮೊತ್ತವನ್ನು ಭೂಮಾಪನ ಇಲಾಖೆಯಿಂದ ಪಾವತಿಸಲಾಗಿರುತ್ತದೆ. |

| | | |
|---|---|---|
| ಈ | ಈ ಯೋಜನೆ ಅಡಿ ಬೆಂಗಳೂರು ನಗರ ವ್ಯಾಪ್ತಿಯಲ್ಲಿ ನಗರ ಆಸ್ತಿಗಳ ಸರ್ವೆಯು ಒಳಪಟ್ಟಿದೆಯೇ ಹಾಗಿದ್ದಲ್ಲಿ, ರಾಜ್ಯ ಸರ್ಕಾರದ ಇ-ಆಡಳಿತ (e-governance) ಇಲಾಖೆಯು ಡೈರೆಕ್ಟರ್ ಜನರಲ್ ನಾಗರೀಕ ವಿಮಾನಯಾನ ಇಲಾಖೆ ಇವರ ಅನುಮತಿ ಮೇರೆಗೆ ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆಯ ಮುಖಾಂತರ ನಗರ ಆಸ್ತಿಗಳ ಸರ್ವೆಯನ್ನು ಡ್ರೋನ್-ಯುಎವಿ ಆಧಾರಿತ ಕೈಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಾಯೋಗಿಕವಾಗಿ ಬೆಂಗಳೂರು ನಗರಪ್ರದೇಶದ ಆಸ್ತಿಗಳ ಡ್ರೋನ್ ಆಧಾರಿತ ಅಳತೆ ಕಾರ್ಯದ ಅನುಷ್ಠಾನಕ್ಕಾಗಿ ಸರ್ಕಾರದ ಆದೇಶ ಸಂಖ್ಯೆ ಕಂಇ 67 ಎಂ ಆರ್ ಆರ್ 2021 ದಿನಾಂಕ: 29-03-2021ರನ್ವಯ ಅಪರ ಮುಖ್ಯಕಾರ್ಯದರ್ಶಿಗಳು ಇ-ಆಡಳಿತ ಇವರ ಅಧ್ಯಕ್ಷತೆಯಲ್ಲಿ "ಅನುಷ್ಠಾನ ಸಮಿತಿ" ಯನ್ನು ನೇಮಕ ಮಾಡಲಾಗಿರುತ್ತದೆ. ಸದರಿ ಅನುಷ್ಠಾನ ಸಮಿತಿಯ ಮಾರ್ಗದರ್ಶನದಡಿಯಲ್ಲಿ ಭಾರತೀಯ ಸರ್ವೇಕ್ಷಣಾ ಸಂಸ್ಥೆಯ ಸಹಯೋಗದೊಂದಿಗೆ 3 ವಾರ್ಡುಗಳಲ್ಲಿ ಈ ಕಾರ್ಯವು ಪ್ರಗತಿಯಲ್ಲಿರುತ್ತದೆ. |
| ಉ | ಈ ಉಭಯ ಇಲಾಖೆಗಳು ಒಂದೇ ಕಾರ್ಯವನ್ನು ಕೈಗೊಂಡು ಸರ್ಕಾರದ ಸಂಪನ್ಮೂಲಗಳನ್ನು ವ್ಯಯ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೇ; ಬಂದಿದ್ದಲ್ಲಿ ಅದನ್ನು ಸರಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಅನುಷ್ಠಾನ ಸಮಿತಿಯ ಮಾರ್ಗದರ್ಶನದಂತೆ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಿಂದ ಈ ಕಾರ್ಯವನ್ನು ಕೈಗೊಳ್ಳಲಾಗುತ್ತಿದ್ದು, ಉಭಯ ಇಲಾಖೆಗಳು ಪ್ರತ್ಯೇಕವಾಗಿ ಒಂದೇ ಕಾರ್ಯವನ್ನು ಕೈಗೊಂಡು ಸರ್ಕಾರದ ಸಂಪನ್ಮೂಲಗಳನ್ನು ವ್ಯಯ ಮಾಡಲಾಗುತ್ತಿದೆ ಎನ್ನುವ ಪ್ರಶ್ನೆ ಉದ್ಭವಿಸುವುದಿಲ್ಲ. |

**ಸಂಖ್ಯೆ: ಕಂಇ 125 ಎಸ್‌ಎಸ್‌ಸಿ 2021**

**(ಆರ್.ಅಶೋಕ)**
ಕಂದಾಯ ಸಚಿವರು